ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್
ರಿಜಿಸ್ಟರ್ಡ್ ನಂ. ಕೆಆರ್ಎನ್ಎಸ್ - 19
2ನೇ ವರ್ಷ 18ನೇ ಸಂಚಿಕೆ ಕೊಪ್ಪ 30-12-1984 ಭಾನುವಾರ ಬೆಲೆ 40 ಪೈಸೆ

## ಹೆಗ್ಡೆ ಸಂಪುಟದ ರಾಜೀನಾಮೆ

ಬೆಂಗಳೂರು: ಕರ್ನಾಟಕದ ಮುಖ್ಯ ಮಂತ್ರಿ ರಾಮಕೃಷ್ಣ ಹೆಗ್ಡೆ ಮಂತ್ರಿ ಮಂಡಳ ರಾಜೀನಾಮೆ ಕೊಟ್ಟಿದೆ.

ರಾಜ್ಯ ವಿಧಾನ ಸಭೆಯನ್ನು ವಿಸರ್ಜಿಸಿ ಮರು ಚುನಾವಣೆಗೆ ಆದೇಶ ನೀಡು ವಂತೆ ಹೆಗ್ಡೆ ರಾಜ್ಯಪಾಲರಿಗೆ ಶಿಫಾರ್ಸು ಮಾಡಿದ್ದಾರೆ.

ವಿಧಾನ ಸಭೆ ವಿಸರ್ಜನೆಯನ್ನು ರಾಜ್ಯ ಕಾಂಗ್ರೆಸ್ ವಿರೋಧಿಸಿದೆ. ವಿಧಾನ ಸಭೆಯಲ್ಲಿ ಎರಡನೇ ದೊಡ್ಡ ಪಕ್ಷಕ್ಕೆ ಸರ್ಕಾರ ರಚಿಸಲು ಅವಕಾಶ ಕೊಡಬೇಕೆಂದು ಅದು ಒತ್ತಾಯಿಸಿದೆ.

# ಡಿ. ಕೆ. ತಾರಾದೇವಿಗೆ ಭಾರಿ ಜಯ; ದೇಶಾದ್ಯಂತ ಕಾಂಗ್ರೆಸ್ (ಐ) ಗೆ ಪ್ರಚಂಡ ಬಹುಮತ

**ಎಂಟನೇ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ (ಐ) ಪಕ್ಷ ಹಿಂದೆಂದೂ ಇಲ್ಲದಂಥ ಅಸಾಧಾರಣ ಬಹುಮತ ಪಡೆಯುವತ್ತ ಮುನ್ನಡೆದಿದೆ. ರಾಜೀವ್ ಗಾಂಧಿ 3,14,878 ಮತಗಳ ಅಂತರದಿಂದ ಮೇನಕಾ ಗಾಂಧಿ ವಿರುದ್ಧ ಗೆದ್ದಿದ್ದಾರೆ.**

**ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದಲ್ಲಿ ಕಾಂಗ್ರೆಸ್ (ಐ) ಅಭ್ಯರ್ಥಿ ಕು|| ಡಿ. ಕೆ. ತಾರಾದೇವಿ ತಮ್ಮ ಸಮೀಪದ ಪ್ರತಿಸ್ಪರ್ಧಿ ಸಿ.ಪಿ.ಐ.ನ ಬಿ. ಕೆ. ಸುಂದರೇಶ್ ಅವರಿಗಿಂತ 1,40,060 ಮತಗಳ ಅಂತರದಿಂದ ಗೆದ್ದಿದ್ದಾರೆ.**

ತಾರಾದೇವಿಗೆ 2,68,972 ಮತಗಳೂ, ಜನತಾ ಸಿಪಿಎಂ ಬೆಂಬಲಿತ ಸುಂದರೇಶ್‌ಗೆ 1,28,872 ಮತಗಳೂ, ರೈತ ಸಂಘ ಬೆಂಬಲಿತ ಸಿ. ಕೆ. ಲೋಕೇಶ ಗೌಡರಿಗೆ 16,446 ಮತಗಳೂ ಬಂದಿವೆ. ತಾರಾದೇವಿ ಮತ್ತು ಸುಂದರೇಶ್ ಹೊರತು ಉಳಿದೆಲ್ಲ 9 ಮಂದಿ ಪ್ರತಿಸ್ಪರ್ಧಿಗಳೂ ಠೇವಣಿ ಕಳೆದುಕೊಂಡಿದ್ದಾರೆ.

**ರಾಜ್ಯದಲ್ಲಿ**

ಕರ್ನಾಟಕದ 28 ಲೋಕಸಭಾ ಸ್ಥಾನಗಳಲ್ಲಿ 24 ಸ್ಥಾನಗಳನ್ನು ಕಾಂಗ್ರೆಸ್ ಗೆದ್ದಿದ್ದು, ಜನತಾ ಪಕ್ಷ 4 ಸ್ಥಾನಗಳನ್ನು ಮಾತ್ರ ಪಡೆಯುವಲ್ಲಿ ಯಶಸ್ವಿಯಾಗಿದೆ. ಜಾರ್ಜ್ ಫರ್ನಾಂಡಿಸ್, ಅಬ್ದುಲ್ ನಜೀರ್ ಸಾಬ್, ಮುಂತಾದ ಜನತಾ ಧುರೀಣರೆಲ್ಲ ಸೋಲನ್ನಪ್ಪಿದ್ದಾರೆ.

ಬೆಂಗಳೂರು ದಕ್ಷಿಣ ಕ್ಷೇತ್ರದಲ್ಲಿ ಮಾತ್ರ ಜನತಾ ಅಭ್ಯರ್ಥಿ ವಿ.ಎಸ್. ಕೃಷ್ಣ ಅಯ್ಯರ್ ಕಾಂಗ್ರೆಸ್‌ನ ಡಾ|| ವೆಂಕಟಗಿರಿ ಗೌಡರನ್ನು ಸೋಲಿಸಿದ್ದಾರೆ. ಉಳಿದಂತೆ ಕೋಲಾರ ಮೀಸಲು ಕ್ಷೇತ್ರದಲ್ಲಿ ಡಾ|| ವೆಂಕಟೇಶ್, ಬಿಜಾಪುರದಲ್ಲಿ ಎಸ್.ಎಂ. ಗುರೆಡ್ಡಿ ಮತ್ತು ಮಂಡ್ಯದಲ್ಲಿ ಮಾಜಿ ಮಂತ್ರಿ ಕೆ. ವಿ. ಶಂಕರಗೌಡ ಇವರುಗಳು ಜನತಾದಿಂದ ಗೆದ್ದವರು.

ಮಂಡ್ಯದಲ್ಲಿ ಕೇಂದ್ರ ವಾಣಿಜ್ಯ ಖಾತೆ ರಾಜ್ಯ ಮಂತ್ರಿ ಎಸ್.ಎಂ. ಕೃಷ್ಣ ಹಾಗೂ ಕೋಲಾರದಲ್ಲಿ ಮಾಜಿ ಲೋ. ಸ. ಸದಸ್ಯ ಜಿ. ವೈ. ಕೃಷ್ಣನ್ ಸೋಲನ್ನಪ್ಪಿದ ಕಾಂಗ್ರೆಸ್ ಪ್ರಮುಖರು.

ಗೆದ್ದ ಕಾಂಗ್ರೆಸ್ ಪ್ರಮುಖರಲ್ಲಿ ವೀರೇಂದ್ರ ಪಾಟೀಲ್, ಶಂಕರಾನಂದ. ಜನಾರ್ದನ ಪೂಜಾರಿ, ಜಾಫರ್ ಷರೀಫ್ ಮುಂತಾದವರಿದ್ದಾರೆ.

ಬಿ.ಜೆ.ಪಿ.ಗೆ ಒಂದು ಸ್ಥಾನವೂ ಸಿಕ್ಕಿಲ್ಲ.

ನಾಗಮಂಗಲದಿಂದ ರಾಜ್ಯ ವಿಧಾನ ಸಭೆಗೆ ನಡೆದ ಮರು ಚುನಾವಣೆಯಲ್ಲಿ ಕಾಂಗ್ರೆಸ್ ಬಂಡಾಯ ಅಭ್ಯರ್ಥಿ ಹೆಚ್. ಟಿ. ಕೃಷ್ಣಪ್ಪ ಜನತಾ ಅಭ್ಯರ್ಥಿಯನ್ನು ಸೋಲಿಸಿ ಆಯ್ಕೆಯಾಗಿದ್ದಾರೆ.

**ವಿಸ್ಮಯಕರ ಸೋಲುಗಳು**

ದೇಶಾದ್ಯಂತ ಪ್ರಮುಖ ವಿರೋಧಿ ನಾಯಕರೆಲ್ಲ ಸೋಲನ್ನಪ್ಪಿದ್ದಾರೆ. ಚರಣ್ ಸಿಂಗ್, ಜಗಜೀವನರಾಂ, ಶರದ್ ಪವಾರ್ ಮಧುದಂಡವತೆ, ಬಿಜು ಪಟ್ನಾಯಕ್ ಬಿಟ್ಟರೆ ಉಳಿದಂತೆ ಚಂದ್ರಶೇಖರ್, ವಾಜಪೇಯಿ, ಹೆಚ್. ಎನ್. ಬಹುಗುಣ, ಮೇನಕಾ ಗಾಂಧಿ, ಮುಂತಾದ ಎಲ್ಲ ವಿರೋಧಿ ನಾಯಕರೂ ಉರುಳಿದ್ದಾರೆ. ಮೇನಕಾ ಗಾಂಧಿ ಠೇವಣಿ ಕಳೆದು ಕೊಂಡಿದ್ದಾರೆ.

**ಪ್ರಮುಖ ಪಕ್ಷಗಳ ಬಲಾಬಲ**
(ಡಿ. 30 ರ ಬೆ. 8 ಗಂಟೆಯವರೆಗೆ)

| | |
|---|---|
| ಪ್ರಕಟಿತ ಫಲಿತಾಂಶ | 498 |
| ಕಾಂಗ್ರೆಸ್ (ಐ) | 392 |
| ತೆ. ದೇಶಂ | 28 |
| ಸಿಪಿಎಂ | 22 |
| ಎಡಿಎಂಕೆ | 12 |
| ಜನತಾ | 10 |
| ಬಿಜೆಪಿ | 2 |
| ಸಿ.ಪಿ.ಐ | 6 |

## ಬಂಡಿಗಡಿ : ಯೋಜನೆ ಬಂದರೂ ಕುಡಿಯಲು ನೀರು ಬರಲಿಲ್ಲ

ಬಂಡಿಗಡಿ: ಈ ಊರಿನಲ್ಲೊಂದು ಕುಡಿವ ನೀರು ಯೋಜನೆ ಉದ್ಘಾಟನೆಯಾಗಿ 6 ತಿಂಗಳೇ ಸಂದಿದ್ದರೂ ಇನ್ನೂ ನಲ್ಲಿಯಲ್ಲಿ ನೀರು ಮಾತ್ರ ಬರದಿರುವ ಬಗ್ಗೆ ಗ್ರಾಮಸ್ಥರು ಹತಾಶರಾಗಿದ್ದಾರೆ.

ಯೋಜನೆ ಮಂಜೂರಾಗಿ ಬಹಳ ಸಮಯದ ಮೇಲೆ ಕೆಲಸ ಶುರುವಾದರೂ, ವಿದ್ಯುಚ್ಛಕ್ತಿ ಮಂಡಳಿ ಮತ್ತು ಪಿ.ಹೆಚ್.ಇ. ಇಲಾಖೆಗಳ ನಡುವಿನ ಬೇಜವಾಬ್ದಾರಿ, ಅದರ ತೆಗಳ ಪೈಪೋಟಿಯಲ್ಲಿ ಕೆಲಸ ಮುಗಿಯುವ ಯಾವ ಸೂಚನೆಗಳೂ ಇಲ್ಲದಿದ್ದಾಗ, ಜೂನ್ 9 ರಂದು ಹರಿಹರಪುರದಲ್ಲಿ ನಡೆದ ಜಿಲ್ಲಾಧಿಕಾರಿಗಳ ಜನಸಂಪರ್ಕ ಸಭೆಯಲ್ಲಿ ಈ ಯೋಜನೆಯ ಮುಕ್ತಾಯಕ್ಕೆ ಒಂದು ಗಡು

(4 ನೇ ಪುಟಕ್ಕೆ)

ಅಡಿಕೆ ಬೆಳೆಗಾರರಿಗೆ ವೀರಪ್ಪ ಗೌಡರ ಕಳಕಳಿಯ ಕರೆ :

## "ಬೇಕಾಬಿಟ್ಟಿ ಮಾರಿ ಧಾರಣೆ ಇಳಿಸಬೇಡಿ; ಬಿಗಿ ಮಾಡಿ, ದರ ಖಂಡಿತ ಇಳಿಯದು"

ಮಾನ್ಯರೆ,

ಅಡಿಕೆ ದರ ಇಳಿಯುತ್ತಿದೆ ಎಂಬುದು ರೈತರ ಕಳವಳ. ಇದಕ್ಕೆ ಕಾರಣರಾರು ಎಂದು ಯೋಚಿಸಿದರೆ—ರೈತರೇ ಕಾರಣ. ನಾವು ಹೊರಗಿನ ಧಾರಣೆಯನ್ನು ಸಹ (ಮುಖ್ಯವಾಗಿ ವೆಲ್ಲೂರಿನದನ್ನು) ದಪ್ಪ ಅಕ್ಷರದಲ್ಲಿ ರೈತ ಭವನದ ಎದುರಿಗೆ ಬರೆಸಿರುತ್ತೇವೆ. ಇದನ್ನು ನೋಡಿಯೂ ವ್ಯಾಪಾರಕ್ಕೆ ಹಾಕಿ, ಗಿರಾಕಿಗಳು ಕೇಳಿದಷ್ಟಕ್ಕೆ ಕೊಟ್ಟರೆ ಮಾರನೇ ದಿನ ಇನ್ನೂ ಐವತ್ತು ರೂಪಾಯಿ ಕಡಿಮೆಗೆ ಕೇಳುತ್ತಾರೆ.

ಈಗ ಮೊದಲನೇ ಕೊಯ್ಲು ಅಡಿಕೆಗೆ ಸರಿಯಾದ ಧಾರಣೆ ಸಿಕ್ಕಿ ರೈತರ ಅನಿವಾರ್ಯಗಳನ್ನು ಮುಗಿಸಿಕೊಳ್ಳಲು ಅವಕಾಶ ಆಗಿವೆ. ಡಿಸೆಂಬರ್ ಆಖೈರು ವ್ಯಾಪಾರಿಗಳ ಬ್ಯಾಂಕ್ ಲೆಕ್ಕ ಚುಕ್ತಾದ ಸಮಯವಾಗಿದ್ದು ಅವರುಗಳು ಹಣದ ಮುಗ್ಗಟ್ಟಿನಲ್ಲಿರುತ್ತಾರೆಂದು ಗೊತ್ತಿದ್ದೂ ಕೂಡ ರೈತರು ಬಂದು, ಕೇಳಿದ ದರಕ್ಕೆ ಕೊಟ್ಟು, ವಾಪ್ಸು ಹೋಗುವಾಗ ಸಿಕ್ಕಿದವರಿಗೆಲ್ಲಾ "ದರ ಇನ್ನೂ ಇಳಿಯುತ್ತೆ" ಎಂದು ಪ್ರಚಾರ ಮಾಡುತ್ತಾ ಹೋದರೆ ಏನು ಮಾಡುವುದು ?

ಅಡಿಕೆ ಬೆಲೆ ಬೆಳೆಯುವ ಪ್ರದೇಶದಿಂದ ನಿಗದಿ ಆಗಬೇಕು ಎಂಬುದನ್ನು ಅರಿಯಬೇಕು. ಕಳೆದ ಬಾರಿ ನವೆಂಬರ್ ಆಖೈರಿಗೆ 17699 ಮೂಟೆ ದಾಸ್ತಾನು ಇದ್ದರೆ, ಈ ಬಾರಿ ಕೇವಲ 4285 ಮೂಟೆ ಮಾತ್ರ ಇದ್ದವು. ಅಡಿಕೆ ಬಂದ ಹಾಗೆ ಖರ್ಚು ಆಗುತ್ತಿದೆ. ಅಡಿಕೆ ಬೆಳೆಯೂ ಜಾಸ್ತಿಯಾಗಿಲ್ಲ, ಕಳೆದ ಬಾರಿಯಷ್ಟೇ ಬರುವಂತೆ ತೋರುತ್ತೆ. ಈ ವಾರದಲ್ಲಿ ವೆಲ್ಲೂರು ರೇಟು ದೇಶಾವರಂಗೆ 3,833 ರೂ. ಇದೆ. ಇದನ್ನು ಬೋರ್ಡಿನಲ್ಲೂ ಬರೆಸಿರುತ್ತೇವೆ. ಇಲ್ಲಿ ರೂ. 2,250 ರಿಂದಾ ರೂ. 2,930 ರಷ್ಟು ಕಡಿಮೆ ಬೆಲೆಗೆ ಮಾರಿ ಮುಂದಿನ ವಾರ ಹಳ್ಳಿಯ ರೇಟೂ ಕಡಿಮೆಯಾಗುವ ಹಾಗೆ ರೈತರೇ ಮಾಡಿದರೆ ಯಾರು ಹೊಣೆ ?

ಅಡಿಕೆ ಅಡ್ವಾನ್ಸು ಎಲ್ಲಾ ಕಡೆಯೂ ದೊರೆಯುತ್ತೆ. ಸಹಕಾರಿ ಸಂಸ್ಥೆಗಳಲ್ಲಾದರೆ ಬಡ್ಡಿದರ ಕೂಡ ವಿಪರೀತ ಬೀಳುವುದಿಲ್ಲ. 1-2 ತಿಂಗಳು ಸ್ವಲ್ಪ ಬಿಗಿ ಮಾಡಲು ಸಾಧ್ಯವಿಲ್ಲವೇ? ಯೋಚಿಸಿ, ಸದ್ಯ ಮಾರಾಟಕ್ಕೆ ಹಾಕಿದರೆ ವೆಲ್ಲೂರು ರೇಟು ಅನುಸರಿಸಿ ಹೇಳಿ. ತೆಗೆದು ಕೊಳ್ಳದಿದ್ದರೆ ಎತ್ತಿ ಇಟ್ಟು ಹೋಗಿ. ಆ ಬಿಗಿ ನಿಮ್ಮಲ್ಲಿ ಬರಲಿ ಎಂಬುದೇ ನನ್ನ ಹಾರೈಕೆ.

ವಂದನೆಗಳೊಂದಿಗೆ,

ನಿಮ್ಮ ವಿಶ್ವಾಸಿ
**ಕೆ. ಎಸ್. ವೀರಪ್ಪಗೌಡ,**
ಅಧ್ಯಕ್ಷರು,
ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿ
ಶಿವಮೊಗ್ಗ

## ವಿಜ್ಞಾನದ ದೃಷ್ಟಿ

# ಸೂರ್ಯನಿಂದ ವಿದ್ಯುತ್

ನಿಸರ್ಗದಿಂದ ಹೊಸ ಹೊಸ ಪ್ರಯೋಜನಗಳನ್ನು, ಸಂಪನ್ಮೂಲಗಳನ್ನು ಪಡೆಯಲು ಮಾನವನ ಪ್ರಯತ್ನ ನಡೆದೇ ಇದೆ. ಇದರಲ್ಲಿ ಒಂದು—ಸೂರ್ಯನಿಂದ ಹೊರ ಹೊಮ್ಮುವ ಬೆಳಕು, ಶಾಖ ಮುಂತಾದ **'ಶಕ್ತಿ'**ಯ ರೂಪಗಳನ್ನು (ಸೌರಶಕ್ತಿ) ಬಳಸಿಕೊಂಡು ವಿದ್ಯುತ್ತನ್ನು ಉತ್ಪಾದಿಸುವುದು.

ಸೂರ್ಯನಿಗೆದುರಾಗಿ ಇಟ್ಟ, ದೊಡ್ಡ ದೊಡ್ಡ ಕನ್ನಡಿಗಳನ್ನೊಳಗೊಂಡ 'ಕೋಶ'ಗಳು ಸೌರಶಕ್ತಿಯನ್ನು ಹೀರಿಕೊಂಡು ವಿದ್ಯುತ್ತನ್ನಾಗಿ ಪರಿವರ್ತಿಸಿ 'ಬ್ಯಾಟರಿ'ಯಂತೆ ಶೇಖರಿಸಿಟ್ಟುಕೊಳ್ಳುತ್ತವೆ. ಹೀಗೆ 1 ದಿನದಲ್ಲಿ ಉತ್ಪಾದಿಸಿದ ವಿದ್ಯುತ್ತು ಹಲವು ದಿನಗಳವರೆಗೆ ಸಾಕಾಗಬಹುದು.

ಹೀಗೆ ಉತ್ಪಾದಿಸಿದ ವಿದ್ಯುತ್ತನ್ನು ನಮಗೆ ಈಗಾಗಲೇ ಪರಿಚಿತವಿರುವ ಎಲ್ಲಾ ಸಾಧನ ಮತ್ತು ಕೆಲಸಗಳಿಗಾಗಿಯೂ ಬಳಸಬಹುದು.

ನಮ್ಮ ಲಕ್ಷಾಂತರ ಹಳ್ಳಿಗಳಿಗೆ ಇನ್ನೂ ಸಾಮಾನ್ಯವಾದ ವಿದ್ಯುದ್ದೀಪವೇ ತಲುಪಿಲ್ಲ. ಆದರೆ ಆಗಲೇ ಇಂಥ ಸೌರ ವಿದ್ಯುತ್ತನ್ನು ಉತ್ಪಾದಿಸುವ ತಂತ್ರಜ್ಞಾನವನ್ನು ನಮ್ಮ ದೇಶವೂ ಬಳಸಲು ಶುರುಮಾಡಿದೆ ಎಂದರೆ ನಂಬಿಕೆಯಾಗಲಿಕ್ಕಿಲ್ಲ.

ಉತ್ತರ ಪ್ರದೇಶದ ಅಚ್ಛೀಜಾ ಎಂಬ ಕುಗ್ರಾಮ ಈಗ ಸೌರಶಕ್ತಿಯ ಹಲವು ಸಲಕರಣೆಗಳಿಂದಾಗಿ ಹೊಸದೊಂದು ವಿಶ್ವವನ್ನೇ ಕಾಣುತ್ತಿದೆ.

2,800 ಜನಸಂಖ್ಯೆಯಿದ್ದು ಹೊರಗಿನ ಪ್ರಪಂಚದ ಸಂಪರ್ಕವೇ ಇಲ್ಲದಿದ್ದ ಈ ಹಳ್ಳಿಗೆ ಕಳೆದ ಜೂನ್ ತಿಂಗಳಲ್ಲಿ ಸೌರಶಕ್ತಿಯ ವಿದ್ಯುತ್ತನ್ನು ಪರಿಚಯಿಸಲಾಯಿತು. ಈಗ ಅಲ್ಲಿ ಮನೆಗಳಿಗೆ ದೀಪಗಳು (ಗ್ರಿಡ್ ಲೈನಿನಿಂದ ಸಂಪರ್ಕವಿಲ್ಲದ), ಕುಡಿಯುವ ನೀರಿಗಾಗಿ ಒಂದು **ಪಂಪ್‌ಸೆಟ್**, ಬೀದಿದೀಪ–ಮಾತ್ರವಲ್ಲದೆ **ಟೆಲಿವಿಷನ್** ಸಹ ಸೌರ ವಿದ್ಯುತ್ತಿನಿಂದ **ಕೆಲಸಮಾಡುತ್ತಿವೆ.**

ಕಳೆದ ವರ್ಷ **ಬೆಂಗಳೂರು** ನಗರದ ಹೊರವಲಯದಲ್ಲಿ (**ಹೆಚ್.ಎ.ಎಲ್.** ಸಮೀಪ) ಇರುವ ಒಂದು ಹಳ್ಳಿಗೆ ಸೌರ ವಿದ್ಯುತ್ತಿನಿಂದ ಬೀದಿ ದೀಪ ಒದಗಿಸಲಾಗಿದೆ.

ಮುಂದಿನ ವರ್ಷ (1985–86ರಲ್ಲಿ) ದೇಶಾದ್ಯಂತ 1000 **ಹಳ್ಳಿಗೆ** ಹಾಗೂ 7 ನೇ ಪಂಚವಾರ್ಷಿಕ **ಯೋಜನೆಯಲ್ಲಿ** 10 ಸಾವಿರ ಹಳ್ಳಿಗಳಿಗೆ **ಸೌರ** ವಿದ್ಯುತ್ತಿನ ಸೌಕರ್ಯವನ್ನು ಕಲ್ಪಿಸಲು **ಸರ್ಕಾರ** ಉದ್ದೇಶಿಸಿದೆ. **ಈಗಾಗಲೇ** ದೇಶದ ವಿವಿಧ ರಾಜ್ಯಗಳ 15 **ಹಳ್ಳಿಗಳಿಗೆ** ಈ ಸೌಲಭ್ಯ ತಲುಪಿದ್ದು, ಇನ್ನೂ 30 ಹಳ್ಳಿಗಳಿಗೆ ಈ ತಿಂಗಳಲ್ಲಿ **ಸೌರ ವಿದ್ಯುದ್ದೀಪದ** ಸೌಲಭ್ಯ ಕಲ್ಪಿಸಲಾಗುವುದು ಹಾಗೂ ಈ ವರ್ಷ 220 ಹಳ್ಳಿಗಳಿಗೆ ವಿದ್ಯುಚ್ಛಕ್ತಿ ಕಲ್ಪಿಸಲಾಗುವುದು.

ಈ ತಂತ್ರಜ್ಞಾನ ಮೂಲೆ ಮೂಲೆಯ ಹಳ್ಳಿಗಳಿಗೆ, ಗುಡ್ಡಗಾಡು, ದ್ವೀಪ ಮುಂತಾದ ಪ್ರದೇಶಗಳ ಊರುಗಳಿಗೆ ವಿದ್ಯುತ್ ಸೌಲಭ್ಯ ಕಲ್ಪಿಸುವಲ್ಲಿ ಸಹಾಯಕವಾಗಿದೆ.

# ನೋಡುವ, ಮಾತಾಡುವ ಕಂಪ್ಯೂಟರ್

ಮಾತಾಡುವ, ಕೇಳುವ ಮತ್ತು ಯೋಚಿಸುವ ಕಾರ್ಯಗಳನ್ನು ಸುಸೂತ್ರವಾಗಿ ನಿರ್ವಹಿಸಬಲ್ಲ ತರಬೇತಿಯನ್ನು ಸೋವಿಯತ್ ಕಂಪ್ಯೂಟರ್‌ಗಳಿಗೆ ನೀಡಲಾಗಿದ್ದು, ಇದೀಗ ವಸ್ತುಗಳನ್ನು, ವಿದ್ಯಮಾನಗಳನ್ನು **'ನೋಡಬಲ್ಲ'** ಹೊಸ ತಲೆಮಾರಿನ ಕಂಪ್ಯೂಟರ್‌ಗಳನ್ನೂ ಅಲ್ಲಿ ನಿರ್ಮಿಸಲಾಗಿದೆ.

ಕಂಪ್ಯೂಟರ್‌ಗಳಿಗೆ ನೋಡುವ ಶಕ್ತಿ ಹೇಗೆ ಕರಗತವಾಗಲು ಸಾಧ್ಯ? ಹೊರನೋಟಕ್ಕೆ ಇದೊಂದು ವಿಲಕ್ಷಣ ವಿಚಾರ ಅನಿಸುತ್ತದೆ. ಬೈಲೊರಶಿಯಾದ ರಾಜಧಾನಿ ಮಿನ್ಸ್ಕ್‌ನಲ್ಲಿ ಕೆಲವು ಸಂಶೋಧನಾ ಕೇಂದ್ರಗಳಲ್ಲಿರುವ ಸಿಬ್ಬಂದಿ ಮಾನವರ ಮಾತುಗಳನ್ನು, ಭಾಷಣಗಳನ್ನು ವಿಶ್ಲೇಷಿಸಬಲ್ಲ ಹಾಗೂ ಇಲೆಕ್ಟ್ರಾನಿಕ್ ಕಣ್ಣುಗಳ ಮೂಲಕ ನೋಡಬಲ್ಲ ಸಾಮರ್ಥ್ಯದ ಕಂಪ್ಯೂಟರ್ ಕೇಂದ್ರವೊಂದನ್ನು ನಿರ್ಮಿಸಿದ್ದಾರೆ.

ವಿದ್ಯುತ್ ಕಿರಣ ನೇತ್ರಗಳನ್ನು **ಇಂತಹ** ಕಂಪ್ಯೂಟರ್‌ಗಳಿಗೆ ಅಳವಡಿಸಲಾಗಿದೆ. ಉದಾಹರಣೆಗೆ ಕಂಪ್ಯೂಟರ್‌ನಲ್ಲಿ ಅಳವಡಿಸಿದ ವಿದ್ಯುತ್ ಕಿರಣಗಳನ್ನು ಮೀನಿನ ಮೇಲೆ ಸ್ಫುರಣಗೊಳಿಸಿ ಅವುಗಳಿಂದ ಹೊಮ್ಮುವ ಸಂಕೇತಗಳನ್ನು ಮಾನವನ ಮಾತಿನ ರೂಪಕ್ಕೆ ಪರಿವರ್ತಿಸಲಾಗುತ್ತದೆ. ಸಂಪರ್ಕ ಸಾಹಕಗಳ ಮೂಲಕ ಕಂಪ್ಯೂಟರ್ ಮಾತಿನ ಮಾಹಿತಿಗಳನ್ನು ಸ್ವೀಕರಿಸಿದ ಕೂಡಲೇ ಅದು ತಾನು ನೋಡಿದ ವಸ್ತುಗಳ ಬಗ್ಗೆ **"ಮಾತನಾಡಲು"** ತೊಡಗುತ್ತದೆ.

(ಸೌಜನ್ಯ: ಸೋವಿಯತ್ ಲೇಖನಮಾಲೆ)

## ವಜ್ರ ನಿಕ್ಷೇಪ ಸೂಚಿಸುವ ಸಸ್ಯಗಳು

ವಜ್ರಗಳ ಅನ್ವೇಷಣೆಯಲ್ಲಿ ಸಸ್ಯಗಳು ಭೂವಿಜ್ಞಾನಿಗಳಿಗೆ ನೆರವಾಗಬಲ್ಲುವು. ಈ ದಿಸೆಯಲ್ಲಿ ಸೋವಿಯತ್ ವಿಜ್ಞಾನಿಗಳು ಆಸಕ್ತಿಕರ ಸಂಶೋಧನೆಗಳನ್ನು ನಡೆಸಿದ್ದಾರೆ. ಮರಗಳು ಹಾಗೂ ಪೊದೆಗಳಲ್ಲಿ ಅಡಕವಾಗಿರುವ ನಿರ್ದಿಷ್ಟ ಸೂಕ್ಷ್ಮ ಘಟಕಾಂಶಗಳು (ಮೈಕ್ರೋ ಎಲಿಮೆಂಟ್ಸ್) ಅವು ಬೆಳೆದಿರುವ ತಾಣಗಳಲ್ಲಿ ವಜ್ರಗಳ ನಿಕ್ಷೇಪ ಹುದುಗಿಕೊಂಡಿದೆ ಎಂಬ ಮುನ್ಸೂಚನೆಗಳನ್ನು ನೀಡಬಲ್ಲುವು. ಕಂಬರ್‌ಲೈಟ್ ಪದರುಗಳು ಹುದುಗಿರುವ ಪ್ರದೇಶಗಳಲ್ಲಿ ಬೆಳೆಯುವ ಮರಗಳ ಎಲೆಗಳಲ್ಲಿ ವೆನೆಡಿಯಮ್, ನಿಕ್ಕಲ್, ಕೊಬಾಲ್ಟ್ ಲೋಹಗಳ ಸೂಕ್ಷ್ಮ ಘಟಕಾಂಶಗಳು ಒಳಗೊಂಡಿದ್ದು, ಅವುಗಳಲ್ಲಿ ವಜ್ರದ ಅಂಶಗಳು ಒಳಗೊಂಡಿರುತ್ತವೆ. ನೆಲದಾಳದಲ್ಲಿರುವ ವಜ್ರದ ಅಂಶಗಳನ್ನು ಮರದ ಬೇರುಗಳು ಹೀರಿಕೊಂಡ ಬಳಿಕ ಅವು ಎಲೆಗಳಿಗೆ ರವಾನಿಸಲ್ಪಡುತ್ತವೆ.

('ಸೋವಿಯತ್ ಲೇಖನಮಾಲೆ' ಯಿಂದ)

# 1985 ಕ್ಕೆ ಸ್ವಾಗತ ಕೋರುತ್ತಾ

ನನ್ನ ಇಪ್ಪತ್ತೈದು ವರ್ಷಗಳ
ಅಖಂಡ ಹೇಮಂತದ ಚಳಿರಾಶಿ ಹೆಪ್ಪುಗಟ್ಟಿ ಗೆಡ್ಡೆ ಗೆಡ್ಡೆ
ಹೆಣಭಾರ ಕೂತಿವೆ ಎದೆಯಲ್ಲಿ ಭೂತಗಳು.
ವರ್ಷ ಮೇಲೊಂದು ವರ್ಷ ಉರುಳಿ, ಹಿಮ ಗೆಡ್ಡೆಗಳು
ಹೊರಳಿ ಗುಡುಗುಡು ಪ್ರಪಾತಗಳು
ಬಾಯ್ತೆರೆಯೆ, ಮೌನಗಳು ಹಿಸುಕಿ
ಜೀವ ವಿಲಿವಿಲಿ ನರಳುತ್ತ
ಕುಡಿಯೆಲ್ಲ ಸುರುಟಿ ಮೊಗ್ಗೆಲ್ಲ ಕರಟಿ
ಹೊಟ್ಟನ್ನೆ ಕುಟ್ಟಿ ಹಿಟ್ಟನ್ನೆ ತಿರುತಿರುಗಿ ಬೀಸಿ
ಎಂಭತ್ತೈದೇ, ನಿನ್ನಣ್ಣಂದಿರ ಬಸಿರುಗಳಲ್ಲಿ
ವಸಂತವರಳಲೇ ಇಲ್ಲ

ಕಾಯುತ್ತಿದ್ದೇನೆ,
ಕಾವಿಗಾಗಿ–ಒಳಗೆ ಸಾಲ್ಕೋ ಸಾಲು
ಬಂದೀಖಾನೆಯ ಸರಳುಗಳಿಗೆ ಗದ್ದ ತಾಗಿಸಿ
ಶೂನ್ಯ ನೋಟದೆ ನಿಂತು ಜೀರ್ಣರಾಗುತ್ತಿರುವ
ನನ್ನ ಕನಸಿಗರ ಬಿಡುಗಡೆಗೆ
ಡೈನಮೈಟ್ ಸ್ಫೋಟಕ್ಕಾಗಿ–
ಕೀಲಿಗಳು ಠಳ್ಳನೆ ಕಳಚಿ
ಗೋಡೆಗಳೊಡೆಯೆ
ಥಳ ಥಳ ನೇಸರು ಹೊಳೆತು
ರುಮ್ಮೆಂದು ಗಾಳಿ ಸುಳಿದು.

ಎದುರು ನೋಡುತ್ತಿದ್ದೇನೆ ಒಲವೇ
ಹೂವರಳಿ ಕುಡಿ ಚಿಗುರಿ
ಹಸಿರು ಬಿರಿತಕ್ಕೆ ಹಕ್ಕಿದನಿಯೊಡೆದು
ಕಾವು ತಟ್ಟುತ್ತ ಗೆಡ್ಡೆಗಳು ಕರಗಿ
ಭಾರವಿಳಿದು ಹಗುರ ಚಿಲುಮೆ ಚಿಮ್ಮಿ
ಛಿಲ್ಲನೆ ಬೀಜ ಮೊಳೆಯು
ಹುಡುಗಿ ನಗೆ ತುಳುಕಿ ತೆಕ್ಕೆ ತುಂಬುವ
ನನ್ನ ವಸಂತ–
ಅಂಥ ನಿನಗಾಗಿ.

ಎಂಭತ್ತೈದೇ,
ಬರುವಾಗ ತರುತ್ತೀಯ
ನಿನ್ನೊಡನೆ ನನ್ನ ವಸಂತವನ್ನು?

—**ಗುರುರಾಜ ತಂತ್ರಿ ಪಣಿಯೂರು**

## ಐ.ಆರ್.ಡಿ.ಪಿ. ಎಮ್ಮೆ

ಸರಕಾರದ ಮಾತು ಕೇಳಿ ಬಡವನಾದ ನಾನು
ಬ್ಯಾಂಕಿನಲ್ಲಿ ಕೊಂಡೆ ಐ ಆರ್ ಡಿ ಪಿ ಲೋನು
ಕೊಡಿಸಿದರು ನನಗೊಂದು ಬಡಕಲು ಎಮ್ಮೆ
ಕೊಟ್ಟಿತ್ತು ಹಾಲು ಎಲ್ಲೋ ಹಿಂದೊಮ್ಮೆ!

## ಕೊಬ್ಬರಿ ಎಣ್ಣೆ

ನಾನಾರು ಹೇಳು ನನಗೆ ಪರಿಮಳವಿಲ್ಲ
ಬಣ್ಣವಂತೂ ಇಲ್ಲ ನಾನು ನೀರಲ್ಲ
ಹೇಳಲು ತಲೆ ಕೆರೆಯದಿರು ಎಲೆ ಮಂಕು ದಿಣ್ಣೆ
ನಾನೇ ಆ ಹೊಸ ಕೊಬ್ಬರಿ ಎಣ್ಣೆ!

—**ಎಸ್. ಸುರೇಶ್ ನಾಯಕ್.**

ನಾಯಿ ಕೊಡೆಗಳ ತೆರದಿ ನಮ್ಮಲ್ಲಿ ಪಕ್ಷಗಳು
ಆಯವಿಲ್ಲದೆ ಹುಟ್ಟಿ ತಪ್ಪಿವೆ ಕಕ್ಷೆಗಳು
ಕಾಂಗ್ರೈ, ಕಾಂಗ್ರೈಸ್ಸು, ಬಿಜೆಪಿ, ದಮಕಿ,
ಮುಂಗಯ್ಯೊ ಮೊಳಕೈಯ್ಯೋ ಬಿದ್ದಿಹರು ಧುಮುಕಿ

—'ನಾಶಾಸ್ತ್ರಿ'

## "ನನಸು"

ರಾಜಕೀಯಕೆ ಬಂದ ನಮ್ಮ ರಾಜೀವ
ಈತನಾ ಕೈಯಲ್ಲಿ ಸಚಿವರಾ ಜೀವ
ಇಂದಿರಾ ಹೇಳಿದಳು 'ಇವನು ನಿಧಾನಿ'
ಆದರೂ ಆಗಿಹನು ಇಂದು ಪ್ರಧಾನಿ

—**ಬಿ. ಎಸ್. ಪರಮೇಶ್ವರ**

## ಓದುಗರ ಪತ್ರ

### ಟಿ.ವಿ. ಆ್ಯಂಟೆನಾಕ್ಕೆ 12 ಎಲಿಮೆಂಟ್ ಸಾಕು

ಮಾನ್ಯರೆ,

ಭದ್ರಾವತಿಯಿಂದ ಮರುಪ್ರಸಾರವಾಗುವ ದೆಹಲಿ ದೂರದರ್ಶನ(ಟಿ.ವಿ.)ದ ಕಾರ್ಯಕ್ರಮಗಳು ಕೊಪ್ಪದ ಸುತ್ತಮುತ್ತಲ ಊರುಗಳಲ್ಲಿ ಸಾಕಷ್ಟು ಸ್ಫುಟವಾಗಿ ಮೂಡಿಬರುತ್ತಿದ್ದು, ಈಗಾಗಲೇ ಹಲವು ಟಿ.ವಿ. ಸೆಟ್‌ಗಳು ಕೆಲಸ ಮಾಡುತ್ತಿರುವುದು ಸರಿಯಷ್ಟೇ.

ಆದರೆ ಟಿ.ವಿ. ಯ 'ಆ್ಯಂಟೆನಾ' ಕ್ಕೆ 18 ಅಥವಾ 20 ಎಲಿಮೆಂಟ್‌ಗಳು ಬೇಕೆಂಬ ಒಂದು ಅಭಿಪ್ರಾಯ ಹರಡಿದ್ದು, ಇದು ಸರಿಯಲ್ಲವೆಂದು ನಮ್ಮ ಅನುಭವದಿಂದ ಕಂಡು ಬಂದಿದೆ.

ನಾವು ಕಂಡುಕೊಂಡಂತೆ, ಟಿ.ವಿ. ಚಾನೆಲ್‌ಗೆ ಸರಿಯಾಗಿ ಹೊಂದಾಣಿಕೆ ಮಾಡಿದ, 12 ಎಲಿಮೆಂಟ್‌ಗಳ ಆ್ಯಂಟೆನಾ 18 ಅಥವಾ 20 ಎಲಿಮೆಂಟಿನದಕ್ಕಿಂತ ಹೆಚ್ಚು ಸಮರ್ಪಕವಾಗಿ ಕೆಲಸ ನಿರ್ವಹಿಸುತ್ತಿದ್ದು ಈಗಾಗಲೇ ನಾವು ಇಂಥ 15–20 ಆ್ಯಂಟೆನಾಗಳನ್ನು ಅಳವಡಿಸಿದ್ದೇವೆ.

—ಹರೀಶ್ ಸುಂದರ ಜೋಷಿ,
ಕೊಪ್ಪ.

ಕೊಪ್ಪದ ಹಿರಿಕೆರೆಯ ಹೂಳೆತ್ತುವ ಬಗ್ಗೆ ಒಂದು ಪ್ರಸ್ತಾಪ:

# ನಾಗರಿಕರೆ, ಶ್ರಮದಾನಕ್ಕೆ ಬರುತ್ತೀರಾ?

ಕೊಪ್ಪದಲ್ಲಿ ಕುಡಿವ ನೀರಿನ ಮುಖ್ಯ ಆಶ್ರಯವಾದ ಹಿರಿಕೆರೆಯಲ್ಲಿ ಹೂಳು ತುಂಬಿಕೊಂಡಿದೆ. ಬೇಸಿಗೆಯ ಕೊನೆಯಲ್ಲಿ ಅಲ್ಲಿ ಉಳಿದಿರುವ ನೀರು ಕೊಳೆತು ವಾಸನೆ ಹೊಡೆಯುತ್ತಿರುತ್ತದೆ. ಇದು ಎಲ್ಲರಿಗೂ ಗೊತ್ತಿರುವ ಸಂಗತಿ.

ಕಳೆದ ವರ್ಷ ನಾಗರಿಕರ ದೂರಿನ ಮೇಲೆ ಆ ನೀರಿನ ಸ್ಯಾಂಪಲ್ಲನ್ನು ಆರೋಗ್ಯ ಇಲಾಖೆ ಸಂಗ್ರಹಿಸಿ, ಉಚ್ಚ ಮಟ್ಟದಲ್ಲಿ ಪರೀಕ್ಷೆಗೊಳಪಡಿಸಿ ಅದು ಕುಡಿಯಲು ಸಂಪೂರ್ಣ ಅಯೋಗ್ಯ ಎಂದು ಘೋಷಿಸಿತ್ತು.

ಆದರೆ ಅದೇ ಅವಧಿಯಲ್ಲಿ ವಿದ್ಯುಚ್ಛಕ್ತಿ ಪೂರೈಕೆಯೂ ಸಾಮಾನ್ಯವಾಗಿ ಅಸ್ತವ್ಯಸ್ತಗೊಂಡಿರುತ್ತದಾದ್ದರಿಂದ ಹರಿಹರಪುರ ಹೊಳೆಯ ನೀರಿನ ಸರಬರಾಜೂ ಅನಿಶ್ಚಿತಗೊಂಡು, ಕೊಪ್ಪದ ಜನತೆ—ನೀರಿಲ್ಲದೆ ಸೊರಗಬೇಕು, ನೀರು ಬೇಕೆಂದರೆ ಕೆಸರು ಕುಡಿಯಬೇಕು–ಎಂಬ ಪರಿಸ್ಥಿತಿ ಉಂಟಾಗುವುದು ಈಗ ಪ್ರತಿ ವರ್ಷ ಮಾಮೂಲಾಗಿದೆ.

ಪುರಸಭೆಯವರು ಕೆರೆಯ ರಿಪೇರಿಗಾಗಿ ಜಿಲ್ಲಾಧಿಕಾರಿಗಳನ್ನು ಕೇಳುತ್ತಲೇ ಇದ್ದಾರೆ. ಆದರೆ ಆ ಮನವಿ ಫಲಿಸಬೇಕಾದರೆ ಎಷ್ಟು ವರ್ಷ ಬೇಕೋ. ಇತ್ತ ಮಂಗಳೂರು ಬಂದರಿನಿಂದ ಹೂಳೆತ್ತುವ ಯಂತ್ರ ತರಿಸಿ ಹೂಳೆತ್ತಿಸುವ ಬಗ್ಗೆ ಯೋಚಿಸಲ್ಪಟ್ಟು ವ್ಯವಹರಿಸಿ, ಅದು ಒಂದೆರಡು ಲಕ್ಷ ಖರ್ಚಿನದಾದ್ದರಿಂದ ಆಗಲಾರದ ಯೋಚನೆ ಎಂದು ತೀರ್ಮಾನಿಸಿದ್ದಾರೆ.

**ಇನ್ನು ಸಾಧ್ಯವಿರುವ ಒಂದೇ ದಾರಿಯೆಂದರೆ ಊರಿನ ಎಲ್ಲ ಜನ ಸೇರಿ, ಶ್ರಮದಾನ ಮಾಡಿ, ಕೆರೆಯ ಹೂಳೆತ್ತಿ ಸ್ವಚ್ಛಗೊಳಿಸುವುದು.**

ಈ ಬಗ್ಗೆ ಕೂಡ ಈಗಾಗಲೇ ಹಲವು ಜನ ತಲೆ ಕೆಡಿಸಿಕೊಂಡಿದ್ದಾರೆ. ಅಂಥ ಕೆಲವರು ನಮ್ಮ ಮುಂದೆ ಶ್ರಮದಾನದ ಪ್ರಸ್ತಾಪ ಇಟ್ಟಿದ್ದರು. ನಾವು ಈ ಬಗ್ಗೆ ಲಯನ್ಸ್ ಕ್ಲಬ್ ಅಧ್ಯಕ್ಷ ಡಾ|| ಮೋಹನ್ ಶೆಟ್ಟಿಯವರ ಹತ್ತಿರ ಚರ್ಚಿಸಿದಾಗ ಅವರು ಬಹಳ ಉತ್ಸಾಹ ತೋರಿಸಿದ್ದಾರೆ. ಶುದ್ಧವಾದ ಕುಡಿವ ನೀರಿನ ಪೂರೈಕೆಗೆ ಸಹಾಯ ಮಾಡುವುದು ಕ್ಲಬ್ಬಿನ ಯೋಜನೆಗಳಲ್ಲೂ ಸೇರಿದೆ. ಹಾಗೆಯೇ ರೋಟರಿ ಕ್ಲಬ್ ಅಧ್ಯಕ್ಷ ವಿಜಯ ಅಜೀಲರೂ ತಮ್ಮ ಸಂಸ್ಥೆ ಇದರಲ್ಲಿ ಪೂರ್ಣ ಸಕ್ರಿಯವಾಗಿ ಪಾಲುಗೊಳ್ಳುವುದೆಂದು ಭರವಸೆ ಕೊಟ್ಟಿದ್ದಾರೆ.

ಪುರಸಭೆಯವರೂ ಈ ಬಗ್ಗೆ ಪೂರ್ಣ ಆಸಕ್ತಿ ತೋರಿಸಿದ್ದಾರೆ. ಇದಕ್ಕೆ ಸಂಬಂಧಪಟ್ಟ ತಾಂತ್ರಿಕ ಮತ್ತಿತರ ಅಂಶಗಳನ್ನೊಳಗೊಂಡ ಯೋಜನೆಯನ್ನು ಸಿದ್ಧಪಡಿಸಲೂ ಒಪ್ಪಿದ್ದಾರೆ. ಈಗಾಗಲೇ ಕೆರೆಯ ಸುಮಾರು 40 ಅಡಿ ಉದ್ದದ ಕೋಡಿಯನ್ನು ಸುಮಾರು 2 ಅಡಿಗಳಷ್ಟು ಏರಿಸಿ, ದಂಡೆ ಸೂಕ್ತವಾಗಿ ಏರಿಸಿದ್ದಾರೆ (ಕೆಲಸ ಮುಕ್ತಾಯದ ಹಂತದಲ್ಲಿದೆ.) ಅಲ್ಲಿರುವ ತಾತ್ಕಾಲಿಕ ಪಂಪ್ ಹೌಸ್ ಬದಲು ಶಾಶ್ವತವಾದ ಪಂಪ್ ಹೌಸನ್ನು ಕಟ್ಟಲಿದ್ದಾರೆ.

ಒಂದು ಬರಿಯ ಅಂದಾಜಿನಂತೆ, ಸರಿಯಾಗಿ ಹೂಳೆತ್ತಿ ಕೆರೆ ಸ್ವಚ್ಛಗೊಳಿಸುವ ಕೆಲಸಕ್ಕೆ ಸುಮಾರು 500 ರಿಂದ 1000 ಜನ ಕನಿಷ್ಠ 3 ಅಥವಾ 4 ದಿನ ಕೆಲಸ ಮಾಡಬೇಕಾಗುತ್ತದೆ. ಹಾಗೂ ತೆಗೆದ ಮಣ್ಣನ್ನು (ಕೆಸರನ್ನು) ಎಲ್ಲಿ ಹಾಕುವುದೆಂಬುದರ ಜೊತೆಗೆ, ಅದನ್ನು ಸಾಗಿಸಲು ಲಾರಿಗಳು ಹಾಗೂ ನೀರು ಖಾಲಿ ಮಾಡಿಕೊಳ್ಳಲು ಎಳೆಂಟು ಪಂಪ್‌ಸೆಟ್‌ಗಳು ಬೇಕಾಗುತ್ತವೆ. ಮತ್ತು ಅಷ್ಟು ಜನ ಕೆಲಸಮಾಡುವುದಾದರೆ ಅವರಿಗೆಲ್ಲ ಹೊಟ್ಟೆ ತುಂಬ ಊಟ–ತಿಂಡಿ–ಕಾಫಿ ಒದಗಿಸಬೇಕಾಗುತ್ತದೆ.

ಈ ಪೈಕಿ, ಲಾರಿ ಮತ್ತು ಪಂಪ್ ಸೆಟ್‌ಗಳನ್ನು ಯಾರಾದರೂ ದಾನಿಗಳಿಂದ ಪಡೆದರೂ ಇತರ ಖರ್ಚುಗಳಿಗಾಗಿ ಸುಮಾರು 25–30 ಸಾವಿರ ರೂ. ಬೇಕಾಗಬಹುದು. ಇದನ್ನೂ ಪುರಸಭೆಯ ವತಿಯಿಂದ ಮತ್ತು ಸಾರ್ವಜನಿಕರಿಂದ ಸಂಗ್ರಹಿಸಲು ಸಾಧ್ಯವಿದೆ.

**ಅಲ್ಲಿಗೆ, ಉಳಿಯುವ ಪ್ರಶ್ನೆ ಜನಶಕ್ತಿಯದು.** ಸುಮಾರು 1000 ಜನ ನಾಲ್ಕೈದು ದಿನ ತಮ್ಮ ಮನೆಯಲ್ಲಿರುವ ಹಾರೆ–ಹೆಡಿಗೆಗಳನ್ನೂ ತೆಗೆದುಕೊಂಡು ಕೆಲಸಕ್ಕೆ ಬರಲು ತಯಾರಾಗಬೇಕು.

**ಕೊಪ್ಪದ ಜನರಿಗೆ ಇದು ಸಾಧ್ಯವಿದೆಯೆ?** ನಮಗೆ ಕುಡಿಯಲು ಶುದ್ಧ ನೀರು ಬೇಕು; ದಿನವೂ ಇನ್ನೊಂದು ಸ್ವಲ್ಪ ಹೆಚ್ಚು ನೀರು ಬೇಕು, ಎಲ್ಲಾ ಸರಿ. ಆದರೆ ಇದಕ್ಕಾಗಿ **ನಾವು ಏನು ಮಾಡಲು ತಯಾರಿದ್ದೇವೆ?** ಬರೀ ಎಲ್ಲರನ್ನೂ ಬಯ್ಯುತ್ತ ಕಾಲ ತಳ್ಳುವುದೇ? ಅಥವಾ ಎಲ್ಲರೊಂದಿಗೆ ಸೇರಿ ನಮಗೆ ಬೇಕಾದ್ದನ್ನು ನಾವೇ ಒದಗಿಸಿಕೊಳ್ಳಲು ತಯಾರಿದ್ದೇವೆಯೆ?—ಇದು ಈಗ ಕೊಪ್ಪದ ಜನರ ಮುಂದಿರುವ ಪ್ರಶ್ನೆ.

ಈ ದೊಡ್ಡ ಕೆಲಸ ನಾವು ಮಾಡಿ ಮುಗಿಸಿದರೆ—ಖಂಡಿತ ಈ ಕೆಲಸ ಸರ್ಕಾರದಿಂದ ಇನ್ನು 10 ವರ್ಷಕ್ಕೂ ಆಗುವುದಿಲ್ಲ—ಆಗ ನಾವು ಕೂಡಲೇ ನೀರು ಶುದ್ಧೀಕರಣ

(4 ನೆ ಪುಟಕ್ಕೆ)

# 'ಶಕ್ತಿದಾಯಕ' ಪಾನೀಯಗಳ ಒಳಗುಟ್ಟು

ಆರೋಗ್ಯ, ಶಕ್ತಿ, ಉತ್ಸಾಹಗಳನ್ನು ಕೊಡುವ ಪಾನೀಯಗಳೆಂದು ಹೇಳಿಕೊಂಡು ಇಂದು ಪೇಟೆಯಲ್ಲಿ ಬೂಸ್ಟ್, ಹಾರ್ಲಿಕ್ಸ್, ಬೋರ್ನ್‌ವಿಟಾ, ಕೋಂಪ್ಲಾನ್, ಮಾಲ್ಟೋವಾ, ವಿವಾ, ನ್ಯೂಟ್ರಾಮುಲ್, ಮುಂತಾದ ಹಲವು ಹನ್ನೊಂದು ಬಗೆಯ ಪುಡಿಯ ಡಬ್ಬಗಳು ಮಾರಾಟವಾಗುತ್ತಿವೆ. ಚಲನ ಚಿತ್ರಗಳಲ್ಲಿ, ಪತ್ರಿಕೆಗಳಲ್ಲಿ ಜಾಹೀರಾತುಗಳ ಮೂಲಕ ಇವುಗಳ ಗುಣಗಾನ ಮಾಡಲಾಗುತ್ತದೆ. "ಇಡೀ ಕುಟುಂಬಕ್ಕೆ ಅಧಿಕ ಶಕ್ತಿ, ಉತ್ಸಾಹಗಳನ್ನೇ ಒದಗಿಸಲು ಡಾಕ್ಟರುಗಳು ಇದನ್ನು ಶಿಫಾರ್ಸು ಮಾಡುತ್ತಾರೆ"; "ಈ ಪಾನೀಯ ಉಗಿಬಂಡಿಯ ಕಲ್ಲಿದ್ದಲಿನಂತೆ ಅತ್ಯಧಿಕ ಶಕ್ತಿದಾಯಕ"; "ಮಕ್ಕಳ ಆಟಗಳಿಗೆ, ದಿನವಿಡೀ ದುಡಿಮೆಗೆ, ದುಡಿಮೆಯ ನಂತರ ಪುನಃ ಚೈತನ್ಯ ಹೊಂದಲು ಪೌಷ್ಟಿಕಾಂಶಗಳ ಆಗರ" ಮುಂತಾಗಿ ಪ್ರಚಾರ ಮಾಡಲಾಗುತ್ತದೆ.

ಹೀಗೆ, ಇವುಗಳ ಮಾರಾಟಕ್ಕೆ ಇಂಥ ಜಾಹೀರಾತುಗಳನ್ನೇ ಅವಲಂಬಿಸಿರುವ, ದೇಹಕ್ಕೆ ಬೇಕಾದ ನೂರೆಂಟು ವಸ್ತುಗಳಿವೆಯೆಂದು ಕೊಚ್ಚಿಕೊಳ್ಳುವ ಇವುಗಳ ತಯಾರಕರ ಪ್ರಚಾರದಲ್ಲಿ ಎಷ್ಟರಮಟ್ಟಿಗೆ ಸತ್ಯಾಂಶವಿದೆಯೆಂದು ಜನರು ತಿಳಿಯಬೇಕಾಗಿದೆ.

1) ಈ ಉತ್ಪನ್ನಗಳಲ್ಲಿರುವ ಕಾರ್ಬೋಹೈಡ್ರೇಟ್, ಪ್ರೋಟೀನ ಮತ್ತು ಕೊಬ್ಬು ದೇಹಕ್ಕೆ ಅಧಿಕ ಪೌಷ್ಟಿಕಾಂಶಗಳನ್ನು ಒದಗಿಸುತ್ತವೆ. ಆದರೆ ಇವುಗಳು ನಾವು ಸೇವಿಸುವ ಎಲ್ಲಾ ಆಹಾರ ವಸ್ತುಗಳಲ್ಲೂ ಇವೆ, ಈ ತಯಾರಿಕೆಗಳಲ್ಲಿ ಮಾತ್ರವಲ್ಲ.

2) ಹೆಚ್ಚಿನ ವಿಟಾಮಿನ್ ಮತ್ತು ಖನಿಜಲವಣಗಳು: ಈ ಜೀವನಾಧಾರ ವಸ್ತುಗಳು ನಾವು ನಿತ್ಯ ಸೇವಿಸುವ ಆಹಾರವಸ್ತುಗಳಲ್ಲಿ ಸಾಕಷ್ಟಿವೆ. ಸಮತೂಕದ ಆಹಾರವನ್ನು ಸೇವಿಸುವವರು ಹೆಚ್ಚಿನ ವಿಟಾಮಿನ್‌ಗಳನ್ನು ಇಲ್ಲವೇ ಖನಿಜ ಲವಣಗಳನ್ನು ಸೇವಿಸುವ ಅವಶ್ಯಕತೆಯಿಲ್ಲ. ಸೇವಿಸಿದಲ್ಲಿಯೂ ಅದರಿಂದ ದೇಹಕ್ಕೆ ಯಾವುದೇ ಲಾಭವಿಲ್ಲ.

3) ರುಚಿ (ಸ್ವಾದ): ಹೆಚ್ಚಿನವುಗಳಲ್ಲಿ ಕೃತಕವಾದ ಕೊಕೋ ಸ್ವಾದವನ್ನೋ, ಇತರ ಹಣ್ಣುಗಳ ಕೃತಕವಾದ ಸ್ವಾದಗಳನ್ನೋ ಬೆರೆಸಲಾಗಿದೆ. ನೈಜವಾದ ಕೋಕೋ ಸ್ವಾದವಿದ್ದರೂ ಹೆಗ್ಗಳಿಕೆಯೆಂದಲ್ಲ. ಯಾಕೆಂದರೆ ಇವುಗಳಲ್ಲಿರುವಷ್ಟು ಪ್ರಮಾಣದ ಕೊಕೋದಲ್ಲಿ ಜಂಭ ಕೊಚ್ಚಿಕೊಳ್ಳಬೇಕಾದಂತಹ ಪೌಷ್ಟಿಕಾಂಶಗಳು ಯಾವುವೂ ಇಲ್ಲ.

4) ಹೆಚ್ಚಿನ ಶಕ್ತಿ ಮತ್ತು ಬೆಲೆ: ಆಹಾರವಸ್ತುಗಳ ಗುಣಮಟ್ಟವನ್ನು ಪೌಷ್ಟಿಕಾಂಶಗಳ ಮೇಲೂ, ಅವುಗಳು ಕೊಡುವ ಶಕ್ತಿಯ ಮೇಲೂ ನಿರ್ಧರಿಸಲಾಗುತ್ತದೆ. ಆಹಾರ ವಸ್ತುಗಳು ಕೊಡುವ ಶಕ್ತಿಯನ್ನು ಕಿಲೋ ಕ್ಯಾಲರಿಗಳಲ್ಲಿ ಅಳೆಯಲಾಗುತ್ತದೆ. ಈ ಮೇಲ್ಕಂಡ ಉತ್ಪನ್ನಗಳು ಗ್ರಾಮಿಗೆ 4 ಕಿಲೋ ಕ್ಯಾಲರಿಯಷ್ಟು ಶಕ್ತಿಯನ್ನು ಕೊಟ್ಟು, ಬೆಲೆಯು ಗ್ರಾಮಿಗೆ ಸರಾಸರಿ 4 ಪೈಸೆಯಷ್ಟಾಗುತ್ತದೆ. ಇವುಗಳಲ್ಲಿ ಹೆಚ್ಚಿನಂಶದ ಶಕ್ತಿಯು ಸಕ್ಕರೆಯಿಂದ ಬರುತ್ತಿದ್ದು, ಸಕ್ಕರೆಯ ಬೆಲೆ ಗ್ರಾಂಗೆ ಅರ್ಧ ಪೈಸೆಯಷ್ಟಿರುವುದು. ಇದರಿಂದ ಇವು ಎಷ್ಟು ದುಬಾರಿ ಬೆಲೆಯವೆಂದು ಗೊತ್ತಾಗುತ್ತದೆ. ಪೌಷ್ಟಿಕಾಂಶಗಳು ಹಾಲಿನಲ್ಲಿ ಇದಕ್ಕಿಂತ ಹೆಚ್ಚಾಗಿದ್ದು, ಹಾಲಿನಲ್ಲಿರುವ ಪೌಷ್ಟಿಕಾಂಶಗಳಿಗೆ ಇದರ ಅರ್ಧದಷ್ಟು ಬೆಲೆಯಿರುವುದು.

ಮಾತ್ರವಲ್ಲದೆ, ಇವುಗಳಲ್ಲಿ 'ಡಾಕ್ಟರುಗಳು ಶಿಫಾರಸು ಮಾಡುವ, ಇಡೀ ಕುಟುಂಬಕ್ಕೆ ಅಧಿಕಶಕ್ತಿ ಉತ್ಸಾಹಗಳನ್ನು ಒದಗಿಸುವುದೆಂದುಕೊಳ್ಳುವ ತಯಾರಿಕೆಯೊಂದನ್ನು ಮುಂದುವರಿದ ರಾಷ್ಟ್ರಗಳಲ್ಲಿ 'ನಿದ್ರೆ ಬರಿಸಲು ಅತ್ಯಂತ ಪ್ರಯೋಜನಕಾರಿಯೆಂದು ಪ್ರಚಾರಪಡಿಸಲಾಗುತ್ತದೆ. ಮುಂದುವರಿದ ರಾಷ್ಟ್ರಗಳ ಗ್ರಾಹಕರಿಗೆ ನಿದ್ರೆ ಬರಿಸಲು ಸಹಾಯಕವಾಗುವುದೆಂದೂ, ಹಿಂದುಳಿದ ರಾಷ್ಟ್ರಗಳಲ್ಲಿ ಅಧಿಕಶಕ್ತಿ, ಉತ್ಸಾಹಗಳನ್ನು ಕೊಡುವುದೆಂದೂ ಜಾಹೀರಾತಾಗುವ ಈ ಉತ್ಪನ್ನದ ಬಗ್ಗೆ ಹೆಚ್ಚು ಹೇಳುವ ಅಗತ್ಯವಿಲ್ಲ.

ಇನ್ನೊಂದು ಮುಖ್ಯವಾದ ಅಂಶವೆಂದರೆ, ಈ ತಯಾರಿಕೆಗಳಲ್ಲಿ ಹೆಚ್ಚಿನವುಗಳು ಹಾಲಿನಲ್ಲಿ ಕರಗಿಸಿ ಸೇವಿಸಲ್ಪಡುವಂಥವು. ಹೀಗೆ ತಯಾರಿಸಲಾದ ಪಾನೀಯದಲ್ಲಿ ಹೆಚ್ಚಿನ ಖರ್ಚಿನಾಂಶ ಈ ಪುಡಿಗಳದ್ದಾದರೂ, ಮುಖ್ಯ ಪೌಷ್ಟಿಕಾಂಶಗಳು ಇವನ್ನು ಕರಗಿಸಲು ಉಪಯೋಗಿಸಿದ, ಕಡಿಮೆ ಬೆಲೆಯ ಹಾಲಿನಿಂದ ಬರುವುವು. ಹಲವು ಖ್ಯಾತ ಆಹಾರತಜ್ಞರುಗಳ ಅಭಿಪ್ರಾಯವೇನೆಂದರೆ, **'ಇವುಗಳು ಹಾಲಿಗೆ ಸ್ವಾದ ಕೊಡಲು ಉಪಯೋಗವಾಗುವ ಅತ್ಯಂತ ದುಬಾರಿ ವಿಧಾನ'!**

ಬಳಕೆದಾರರು ಇಂತಹ ತಪ್ಪು ಅಭಿಪ್ರಾಯಗಳನ್ನುಂಟುಮಾಡುವ ಪ್ರಚಾರಗಳ ಕುರಿತು ಜಾಗ್ರತೆಯಿಂದಿದ್ದು, ಚಿಕ್ಕ ಮಕ್ಕಳಿಗೆ ಹಾಲಿನ ಬದಲು ಇಂತಹವುಗಳ ಅಭ್ಯಾಸಗಳನ್ನುಂಟುಮಾಡಿಸಿ ಇವನ್ನು ಅವಶ್ಯಕವಾದ ವಸ್ತುಗಳನ್ನಾಗಿ ಪರಿವರ್ತಿಸಿಕೊಳ್ಳುವ ಮೊದಲು ಮೇಲಿನ ವಿಷಯಗಳನ್ನು ಮನವರಿಕೆ ಮಾಡಿಕೊಳ್ಳುವುದು ಅಗತ್ಯ.

(ಕೃಪೆ: ಬಳಕೆದಾರರ ವೇದಿಕೆ)

## ಚುನಾವಣೆ ನಂತರ ಘರ್ಷಣೆ ಯತ್ನ ?

ಕೊಪ್ಪ: 8 ನೇ ಲೋಕಸಭಾ ಚುನಾವಣೆ ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದಲ್ಲಿ, ಒಂದೆರಡು ಕಡೆ ಸಣ್ಣ ಪುಟ್ಟ ಚಕಮಕಿ ಬಿಟ್ಟರೆ, ಸಾಮಾನ್ಯವಾಗಿ ಶಾಂತಿಯುತವಾಗಿ ನಡೆದಿದೆ. ಶೃಂಗೇರಿ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಪೂರ್ಣ ಶಾಂತಿಯುತವಾಗಿ ನಡೆದಿದೆ.

ಆದರೆ ಚುನಾವಣೆಗೆ ಸಂಬಂಧಪಟ್ಟಂತೆ ಚುನಾವಣೆಯ ಮರುದಿನ ಬಸರಿಕಟ್ಟೆಯಲ್ಲಿ ಕಾಂಗ್ರೆಸ್ಸಿನ ಹಲವಾರು ಪ್ರಮುಖರು ಸೇರಿ ಸಿಪಿಐ ಪರವಾದ ಕಾರ್ಮಿಕರ ಮೇಲೆ ಹಲ್ಲೆ ಮಾಡಲು ಯತ್ನಿಸಿದ್ದಾಗಿ ಸಿಪಿಐ ಚುನಾವಣಾ ಪ್ರಚಾರದ ಶೃಂಗೇರಿ ಕ್ಷೇತ್ರ ಸಂಚಾಲಕ ಎನ್. ಆರ್. ರಾಮಚಂದ್ರ ಆರೋಪಿಸಿದ್ದಾರೆ.

ಬಸರಿಕಟ್ಟೆಯಲ್ಲಿ ಸೋಮೇಶ್ವರ ಖಾನ್ ಎಸ್ಟೇಟಿನ ಕಾರ್ಮಿಕ ಶಿವಪ್ಪ ಎಂಬಾತ ಗುಡ್ಡಪ್ಪ ಬಿನ್ ಈರಪ್ಪ ಎಂಬ ಹೆಸರಿನಿಂದ ಖೋಟಾ ಮತ ಚಲಾಯಿಸಿದ್ದು ಅನಂತರ ಸಿಪಿಐ ಕಾರ್ಯಕರ್ತರು ಕರೆದು ವಿಚಾರಿಸಿದಾಗ, ತಾನು ಆ ಹೆಸರಿನಿಂದ ಕಾಂಗ್ರೆಸ್ಸಿಗೆ ಮತ ಹಾಕದಿದ್ದರೆ ಕೆಲಸ ಬಿಟ್ಟು ಓಡಿಸುವುದಾಗಿ ಕಾಂಗ್ರೆಸ್ಸಿನವರು ಬೆದರಿಕೆ ಹಾಕಿದ್ದಾಗಿ ಒಪ್ಪಿಕೊಂಡು ಅದೇ ರೀತಿ ಬರೆದು ಕೊಟ್ಟನೆಂದೂ, ಇದಕ್ಕೆ ಪ್ರತೀಕಾರವಾಗಿ ಡಿ. 25 ರಂದು ಬಸರಿಕಟ್ಟೆ ಪಂಚಾಯ್ತಿ ಮಾಜಿ ಚೇರ್ಮನ್ ಎಸ್. ಕೆ. ಸುಬ್ರಮಣ್ಯ ಅವರು ಶೃಂಗೇರಿ ಪೋಲೀಸರಿಗೆ ರಾಮಚಂದ್ರ ಅವರೂ ಸೇರಿದಂತೆ 19 ಜನ ಸಿಪಿಐ ಬೆಂಬಲಿಗರ ಮೇಲೆ ಸುಳ್ಳು ದೂರು ನೀಡಿದ್ದಲ್ಲದೆ, ಕಮಲನಾಥನ್, ವಜ್ರಪ್ಪ, ಸತೀಶ್, ಎಸ್ ಜಿ. ಚಂದ್ರಶೇಖರ್, ಚಂದ್ರಯ್ಯ ಹೆಗ್ಡೆ ಮುಂತಾದವರೊಂದಿಗೆ ಹಲವಾರು ಜನರ ಗುಂಪು ಕಟ್ಟಿಕೊಂಡು ಬಂದು ಕಾರ್ಮಿಕರ ನಡುವೆ ಪರಸ್ಪರ ಹಲ್ಲೆಗೆ ಪ್ರಚೋದಿಸಿದರೆಂದೂ, ತಮ್ಮಗಳ ಮಧ್ಯಪ್ರವೇಶದಿಂದ ಗಲಭೆ ನಡೆಯಲಿಲ್ಲವೆಂದೂ ರಾಮಚಂದ್ರ ತಿಳಿಸಿದ್ದಾರೆ. ಈ ಘಟನೆಯಲ್ಲಿ ಶೃಂಗೇರಿ ಠಾಣಾಧಿಕಾರಿ ವರ್ಣೇಕರ್ ಅವರು ಈ ತಂಡದವರಿಗೆ ಕುಮ್ಮಕ್ಕಾಗಿದ್ದರೆಂದೂ ಅವರು ಆರೋಪಿಸಿದ್ದಾರೆ.

ಈ ಬಗ್ಗೆ ಎರಡೂ ಕಡೆಯವರು ಕೊಪ್ಪ ಸರ್ಕಲ್ ಇನ್‌ಸ್ಪೆಕ್ಟರ್‌ಗೆ ಬಾಯ್ದರೆ ದೂರು ನೀಡಿದ್ದು, ಅವರು ವಿಚಾರಣೆ ನಡೆಸುತ್ತಿದ್ದಾರೆ.

## ಪುರಂದರ ದಾಸರ ಮತ್ತು ತ್ಯಾಗರಾಜರ ಆರಾಧನೆ

ಹರಿಹರಪುರ: ಇಲ್ಲಿಗೆ ಸಮೀಪದ ಸೂರಳಿಯಲ್ಲಿ ಜನವರಿ 11 ಮತ್ತು 12 ರಂದು ಪುರಂದರ ದಾಸರ ಮತ್ತು ತ್ಯಾಗರಾಜರ ಆರಾಧನಾ ಮಹೋತ್ಸವ ನಡೆಯುತ್ತದೆ. ಇದೀಗ ಸತತ 3 ನೇ ವರ್ಷ ನಡೆಯುತ್ತಿರುವ ಈ ಉತ್ಸವದ ಸಂದರ್ಭದಲ್ಲಿ ಸುತ್ತ ಮುತ್ತಲ ಹಲವಾರು ಜನ ಸ್ಥಳೀಯ ಸಂಗೀತಗಾರರು ಮತ್ತು ಸಾಧಕರುಗಳಿಂದ ಹಾಗೂ ಅತಿಥಿ ಕಲಾವಿದರುಗಳಿಂದ ಸಂಗೀತ ಕಚೇರಿಗಳು, ಹರಿಕಥೆಗಳು ಪ್ರತಿದಿನ ಸಂಜೆ 4 ರಿಂದ ರಾತ್ರಿ 10 ರವರೆಗೆ ನಡೆಯುತ್ತವೆ. ಮಹೋತ್ಸವವನ್ನು 11 ರ ಬೆಳಿಗ್ಗೆ ಹರಿಹರಪುರ ಮಠಾಧೀಶರು ಉದ್ಘಾಟಿಸುತ್ತಾರೆ.

## ಕೊಪ್ಪ ಸಿದ್ಧರಮಠ ರಸ್ತೆಗೆ 1 ಕಿ. ಮೀ. ಟಾರು

ಕೊಪ್ಪ: ಸಿದ್ಧರಮಠ – ಕೊಪ್ಪ ರಸ್ತೆಯಲ್ಲಿ 1 ಕಿ. ಮೀ. ಟಾರು ಹಾಕುವ ಕಾಮಗಾರಿ ಈ ವರ್ಷ ಮಂಜೂರಾಗಿದ್ದು, ಗಾಡಿಕೆರೆ ಏರನ್ನು ಸಮಗೊಳಿಸಲು 20 ಸಾವಿರ ರೂ. ಮಂಜೂರಾಗಿರುವುದಾಗಿ ತಿಳಿದು ಬಂದಿದೆ.

## ಕೊಪ್ಪ ಲಯನ್ಸ್ ಕ್ಲಬ್ಬಿಗೆ ಜಿಲ್ಲಾ ಗೌರ್ನರ್ ಭೇಟಿ

ಕೊಪ್ಪ: ಇಲ್ಲಿನ ಲಯನ್ಸ್ ಕ್ಲಬ್ ಶಾಖೆಗೆ ಲಯನ್ಸ್ 324–ಡಿ–4 ಜಿಲ್ಲಾ ಗೌರ್ನರ್‌ರಾದ ದಾವಣಗೆರೆಯ ಲಯನ್ ವಿ.ಕೆ. ರೇವಣಕರ್ ಅವರು 3–1–85 ರಂದು ಅಧಿಕೃತ ಭೇಟಿ ಕೊಡಲಿದ್ದಾರೆ.

ಅಂದು ಲಯನ್ಸ್ ಕ್ಲಬ್ ಏರ್ಪಡಿಸಿರುವ ರಕ್ತದಾನ ಶಿಬಿರದ ಉದ್ಘಾಟನೆಯನ್ನು ಬೆಳಗ್ಗೆ 9 ಗಂಟೆಗೆ ನೆರವೇರಿಸುವ ಅವರು, ಲಯನ್ಸ್ ದತ್ತುಗ್ರಾಮವಾದ ತಲಮಕ್ಕಿ ಗ್ರಾಮದ ಸುಮಾರು 150 ಜನರಿಗೆ ವೃದ್ಧಾಪ್ಯವೇತನ ಮತ್ತು ವಿಧವಾ ಮಾಸಾಶನಗಳನ್ನು ತಹಸೀಲ್ದಾರರ ಅಧ್ಯಕ್ಷತೆಯಲ್ಲಿ ವಿತರಣೆಮಾಡುತ್ತಾರೆ.

ಸಂಜೆ ನಡೆಯುವ ಸಮಾರಂಭದಲ್ಲಿ ಇಲ್ಲಿನ ಪ್ರಥಮ ದರ್ಜೆ ಕಾಲೇಜಿನ ಕುಡಿವ ನೀರಿನ ಟ್ಯಾಂಕಿಗಾಗಿ ಲಯನ್ಸ್ ಕ್ಲಬ್ ನೀಡಿರುವ 5 ಸಾವಿರ ರೂ. ಗಳ ದೇಣಿಗೆಯನ್ನು ಕಾಲೇಜು ಸಮಿತಿಗೆ ನೀಡುವರು.

## ನ. ರಾ. ಪುರ ಪೋಲೀಸರಿ ಮೈಸೂರು ಬ್ಯಾಂಕಿನಿಂದ ಸಾಲರೂಪದಲ್ಲಿ ಸೈಕಲ್

ನರಸಿಂಹರಾಜಪುರ: ಇಲ್ಲಿನ ಮೈಸೂ ಬ್ಯಾಂಕ್ ಶಾಖೆ ಡಿ. 20 ರಂದು ಪೋಲೀ ಠಾಣೆಯ ಸಿಬ್ಬಂದಿ ವರ್ಗದವರಿಗೆ ಸೈಕ ಗಳನ್ನು ಸಾಲರೂಪದಲ್ಲಿ ವಿತರಿಸಿತು.

ಶಾಖೆಯ ಮ್ಯಾನೇಜರ್ ರಾಮಶೇಷ ರಾವ್ ಅವರ ಅಧ್ಯಕ್ಷತೆಯಲ್ಲಿ ತರೀ ಡಿವೈ. ಎಸ್. ಪಿ. ರಂಗಡೊರ್ರೈ ಸೈಕ ಗಳನ್ನು ತಮ್ಮ ಸಿಬ್ಬಂದಿಗೆ ನೀಡಿದರ ಪೋಲೀಸ್ ಯೋಜನೆಯನ್ವಯ ಉಳಿ ಯದ ಪಾಸ್ ಬುಕ್‌ಗಳನ್ನು ತಹಸೀಲ್ದಾ ಸೋಮಶೇಖರ್ ವಿತರಿಸಿದರು. ಸರ್ಕ ಇನ್‌ಸ್ಪೆಕ್ಟರ್ ಪಂಚಾಕ್ಷರಿ ಸ್ವಾಮಿ ಉ ಸ್ಥಿತರಿದ್ದರು.

ಬ್ಯಾಂಕಿನ ಅಕೌಂಟೆಂಟ್ ಟಿ. ಕೆ. ಶ್ರೀಪತಿ ಸ್ವಾಗತಿಸಿ, ಸಬ್ ಇನ್‌ಸ್ಪೆಕ್ಟ ಬಿ. ಜೆ. ಭಂಡಾರಿ ವಂದಿಸಿದರು.

## ಹಿರಿಕೆರೆಯಲ್ಲಿ ಶ್ರಮದಾನ

(3 ನೇ ಪುಟದಿಂದ)

ಘಟಕಕ್ಕಾಗಿ ಒತ್ತಾಯಿಸಬಹುದು. ನಮ್ಮ ಇಷ್ಟು ಪ್ರಯತ್ನದ ಮುಂದೆ ನಮ್ಮ ಸರ್ಕಾರವೇನು–ಯಾವುದೇ ಜಿಯಾ, ಖೊಮೇನಿ, ಇಡಿ ಅಮಿನ್ ಅಥವಾ 'ತುರ್ತು ಸ್ಥಿತಿ' ಯ ಸರ್ಕಾರವಾದರೂ ಅದನ್ನು ಕೊಟ್ಟೇ ಕೊಡುತ್ತದೆ.

ಆದ್ದರಿಂದ ಕೊಪ್ಪದ ನಾಗರಿಕರೆ, ಮೇ ತಿಂಗಳ ಮಧ್ಯಭಾಗದಲ್ಲಿ ನಡೆಸಬೇಕಾಗಿರುವ ಈ 'ಆಂದೋಳನ' ನಿಮಗೆ ಬೇಕಿದ್ದರೆ ಅದಕ್ಕಾಗಿ ಈಗಲೇ ಮಾನಸಿಕ ಸಿದ್ಧತೆ ಮಾಡಿಕೊಳ್ಳಿ. ನಿಮಗೆ–ನಿಮ್ಮ ಮಕ್ಕಳು ಮರಿಗೆ ಶುದ್ಧ ಕುಡಿವ ನೀರು ಬೇಕಿದ್ದರೆ ಇದೊಂ ದಾರಿ. ಕೆಲಸಕ್ಕೆ ಹೆಗಲು ಕೊಡಲು ನೀ ತಯಾರಿದ್ದರೆ, ಕೆಲಸದ ಜೊತೆಗೆ ಇನ್ನಿ ಎಲ್ಲ ಜವಾಬ್ದಾರಿಗಳಿಗೂ ಹೆಗಲು ಕೊಡ ಜನರಿದ್ದಾರೆ.

ಯೋಚಿಸಿ.

—ಸಂಪಾದ

[ಒಂದು ಕೊನೇ ಮಾತು: ಕೆರೆ ಮೇಲ್ಭಾಗದಲ್ಲಿ ಭೂಮಿ ಮಂಜೂರು ಮ ಡಿಸಿಕೊಂಡ ಏಳೆಂಟು ಜನ ಕೆಳಗಡೆಗೆ ತ್ತುವರಿ ಮಾಡುತ್ತ ಕೆರೆಯ ಪಾತ್ರವನ್ ಅದರ ನೀರಿನ ಮೂಲವಾದ ಜೌಗನ್ ಆಕ್ರಮಿಸಿದ್ದಾರೆ. ಇದನ್ನು ಬಿಡುಗಡೆ ಡಿಸಿ ಕೊಡಬೇಕಾದ ಹೊಣೆ ತಹಸೀಲ್ದಾ ಮೇಲಿದೆ. —ಸಂ

## ಬಂಡಿಗಡಿ ಕುಡಿವ ನೀರು ಯೋಜನೆ

(1 ನೇ ಪುಟದಿಂದ)

ವು ವಿಧಿಸಲಾಯಿತು. ಹೀಗಾಗಿ ಜುಲೈ 26 ರಂದು ಜಿಲ್ಲಾಧಿಕಾರಿಗಳಿಂದಲೇ ಉದ್ಘಾಟನೆಯೂ ಆಯಿತು. ಕೆಲವು ದಿನ ನಲ್ಲಿಗಳಲ್ಲಿ ನೀರೂ ಬಂತು.

ಅಷ್ಟೇ. ಕೆಲವೆಡೆ ನೆಲದಡಿಯ ಪೈಪು ಒಡೆದು ನೀರು ಬರುವುದು ನಿಂತಿತು. ಪಂಪ್ ಸೆಟ್ ಕೆಟ್ಟಿತು. ಹಲವು ಕಾಲದ ಮೇಲೆ ಅದೂ ರಿಪೇರಿಯಾಯಿತೆನ್ನುವಾಗ ನೀರು ಬಿಡುವ ಕೆಲಸದ ಉಸ್ತುವಾರಿ ಯಾರದೆಂಬ ಜಿಜ್ಞಾಸೆಯಲ್ಲಿ ಯೋಜನೆ ನೆಲಕಚ್ಚಿತು.

ಕಾರಣವಿಷ್ಟೆ: ಯೋಜನೆಯನ್ನು ಸಮರ್ಪಕವಾಗಿ ಪೂರ್ಣಗೊಳಿಸಿ ನೀರು ಬಿಡುವುದು ಮತ್ತು ಇತರ ಜವಾಬ್ದಾರಿಗಳನ್ನು ಗ್ರಾಮ ಪಂಚಾಯ್ತಿಗೆ ವಹಿಸ ಬೇಕಿತ್ತು. ಅದು ಆಗಲಿಲ್ಲ. ಮೊದ್ಲು ಕೆಲ ದಿನ ಪಂಚಾಯ್ತಿಯವರು 'ಹೀಗೇ' ಸೌಜನ್ಯಕ್ಕೆ ಕೆಲಸ ಮಾಡಿದರು. ಆದರೆ ಚಾರ್ಜು ವಹಿಸದೆ ಕೆಲಸ ಮಾಡಿಕೊಂಡುಹೋಗಲು ಅವರು ತಯಾರಿಲ್ಲ. ಚಾರ್ಜು ವಹಿಸಲು ಅಲ್ಲಿ ಒಂದಿದ್ದರೆ ಒಂದಿಲ್ಲ, ನೆಲದಡಿ ಪೈಪು ಒಡೆದು ಟ್ಯಾಂಕಿನಲ್ಲಿ ನೀರು ನಿಲ್ಲುತ್ತಿಲ್ಲ.

ಅಗತ್ಯವಾದ ಎಲ್ಲಾ ನಿಬಂಧನೆಗಳನ ಪಂಚಾಯ್ತಿಯವರು ಪೂರೈಸಿದ್ದರೂ ಹೆಚ್. ಇ. ಇಲಾಖೆಯಲ್ಲಿ ಯಾರೂ ಲ್ಲವಾದಂತೆ ಕಾಣುತ್ತಿದೆ.

ಈಗ ಊರಿನ ಮುಖ್ಯ ಭಾಗದ ಹೇಗೋ ಸ್ವಲ್ಪ ದಿನ ನಡೆಯುತ್ತಾದ ಬಡಾವಣೆಯ ಸುಮಾರು 15 ಮನೆಯ 1 ಕಿ. ಮೀ. ಗೂ ಹೆಚ್ಚು ದೂರ ಜ ನೀರು ಒಯ್ಯಬೇಕಾಗಿದೆ.

ಇದು ಒಂದು ಊರಿನ ಸ್ಥಿತಿ. ಗ್ರಾ ತರ ನೀರು ಸರಬರಾಜು ಯೋಜನೆಯ ನ್ನುಳಿದ ಊರುಗಳ ಕತೆ ಬೇರೆ ಥರ ಇರು ಬಹುದೋ ಏನೋ !

### ಕರ್ನಾಟಕ ದಲಿತ ಸಂಘರ್ಷ ಸಮಿತಿ

## ಜಿಲ್ಲಾ ಸಂಚಾಲಕರಾಗಿ ಎಂ. ಡಿ. ಗಂಗಯ್ಯ

ಚಿಕ್ಕಮಗಳೂರು: ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಚಿಕ್ಕಮಗಳೂರು ಜಿಲ್ಲಾ ಸಂಚಾಲಕರಾಗಿ ಎಂ. ಡಿ. ಗಂಗಯ್ಯ ಹಾಗೂ ಜಿಲ್ಲಾ ಸಂಘಟನಾ ಸಂಚಾಲಕರಾಗಿ ಕೆ. ಟಿ. ರಾಧಾಕೃಷ್ಣ ಅವರುಗಳು ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

ಡಿ. 16 ರಂದು ಸಮಿತಿಯ ಕಚೇರಿಯಲ್ಲಿ ನಡೆದ ಸಭೆಯಲ್ಲಿ ಈ ಹಿಂದೆ ರಚಿಸಲಾಗಿದ್ದ ಹಂಗಾಮಿ ಸಮಿತಿಯನ್ನು ವಿಸರ್ಜಿಸಿ ನೂತನವಾಗಿ ಪದಾಧಿಕಾರಿಗಳನ್ನು ಆಯ್ಕೆ ಮಾಡಲಾಯಿತು. ಜಿಲ್ಲಾ ಖಜಾಂಚಿಯಾಗಿ ಇ. ಎಸ್. ರಂಗಸ್ವಾಮಿ ಆಯ್ಕೆಯಾದರು.

ದಲಿತ ಸಂಘರ್ಷ ಸಮಿತಿ ಅಂಗೀಕರಿಸಿರುವ ತನ್ನ 'ಸಂವಿಧಾನ'ವನ್ನು ಸಭೆಯಲ್ಲಿ ಓದಿ ಚರ್ಚಿಸಿ, ಅದರಂತೆ ಸಂಘಟನೆ ಬೆಳೆಸಲೂ ತೀರ್ಮಾನಿಸಲಾಯಿತು.

ಗಂಗಯ್ಯ ಮತ್ತು ರಾಧಾಕೃಷ್ಣ ಇಬ್ಬರೂ ಪೂರ್ಣಾವಧಿ ಕಾರ್ಯಕರ್ತರಾಗಿದ್ದು ದಲಿತರ ಸಮಸ್ಯೆಗಳು ಮತ್ತು ಸಂಘಟನೆಯ ವಿವರಗಳಲ್ಲಿ ಒಳ್ಳೆಯ ಅನುಭವಿಗಳಾಗಿದ್ದಾರೆ. ವಿದ್ಯಾವಂತರೂ, ತತ್ವ ಮತ್ತು ಸಿದ್ಧಾಂತಗಳ ಹಿನ್ನೆಲೆಯುಳ್ಳವರೂ ಆದ ಇವರು ದಲಿತರ ಸಮಸ್ಯೆಗಳ ಬಗ್ಗೆ ನಿಷ್ಠುರರಾಗಿರುವಂತೆಯೇ ದುಡುಕು–ಅಸಹನೆಗಳಿಲ್ಲದ ಒಳ್ಳೆಯ ಸಂಘಟಕರೂ ಆಗಿದ್ದಾರೆ. ಗಂಗಯ್ಯ ಸುಮಾರು 10 ವರ್ಷಗಳ ಹಿಂದೆ ಜಿಲ್ಲಾ ಸಂಚಾಲಕರಾಗಿ ಜಿಲ್ಲೆಯಲ್ಲಿ ಸಂಘರ್ಷ ಸಮಿತಿಯನ್ನು ಗಟ್ಟಿಯಾಗಿ ಮತ್ತು ವ್ಯಾಪಕವಾಗಿ ಬೆಳೆಸಿಕೊಂಡು ಬಂದವರು.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್; ಅಚ್ಚು: ದೀನಬಂಧು ಅಚ್ಚು ಕೂಟ, ಕೊಪ್ಪ.